ಓದಿ ಹೇಳಿ ಸರಣಿ

# ಮಿಷ್ಟುವಿನ ಮುಗಿಯದ ಪ್ರಶ್ನೆಗಳು

ವಿದ್ಯಾ ಮತ್ತು ರಾಜಾರಾಮ್ ಶರ್ಮ

ಪುಟ್ಟ ಮಿಷ್ಟುವಿಗೆ ಯಾರಿಗೂ ಇಲ್ಲದ ಕುತೂಹಲ.
ಯಾರು ಎಲ್ಲಿ ಇದ್ದಾರೆ?
ಏನು ಮಾಡುತ್ತಾ ಇದ್ದಾರೆ?
ಹೇಗೆ ಇದ್ದಾರೆ?
ಇವೆಲ್ಲಾ ತಿಳಿಯುವ ಕುತೂಹಲ ಅವಳದು.

ಹೀಗೆ ಒಮ್ಮೆ,
ಕುತೂಹಲ ತಡೆಯಲಾಗದೆ,
ಸುತ್ತಮುತ್ತ ಏನಿದೆ ಎಂದು ನೋಡಲು,
ಮಿಷ್ಟು ಹೊರಟಳು.





ಸಿಕ್ಕ ಎಲ್ಲರನ್ನು ಮಾತನಾಡಿಸುತ್ತಾ,
ಅಲ್ಲಿ ಇಲ್ಲಿ ನೋಡುತ್ತಾ ಹೋಗುತ್ತಿದ್ದಾಗ,
ಅವಳಲ್ಲಿ ಉಂಟಾಯಿತು
ಅಪಾರ ಆತಂಕ, ಚಿಂತೆ, ಗಾಬರಿ ಹಾಗು ಮೆಚ್ಚುಗೆ.

ಅದು ಆದದ್ದು ಹೀಗೆ.
ಹೇಳುತ್ತೇನೆ ಕೇಳು.



ಅಲ್ಲಿ ಏಕೆ ಇದ್ದೀಯ?
ಆ ಪೊಟರೆಯಲ್ಲಿ?
ಮಿಷ್ಟು ಕೇಳಿದಳು,
ಕುತೂಹಲ ಇದ್ದರೂ ಆತಂಕದಿಂದ.



ಪೊಟರೆ?
ಆಶ್ಚರ್ಯದಿಂದ ಕೇಳಿದುವು,
ಆ ಮರಕುಟಿಗ ಮರಿಗಳು.
ಪೊಟರೆ ಏನೆಂದು
ನಮಗೇನು ಗೊತ್ತು,
ಗೊತ್ತಿರುವುದು ಕೇವಲ ಇಷ್ಟೇ,
ಇದು ಮನೆ, ನಮ್ಮ ಮನೆ.
ಇಲ್ಲೇ ಇದ್ದು, ಬೆಳೆದು,
ರೆಕ್ಕೆ ಬಲಿತ ಕೂಡಲೆ
ಹಾರಿ ಹೋಗುತ್ತೇವೆ,
ವಿಶಾಲವಾದ
ಆಕಾಶದಲ್ಲಿ ಹಾರಾಡಲು.



ಅಲ್ಯಾಕಿದ್ದಿಯಾ?
ಆ ಹಿತವಿಲ್ಲದ ಚಿಕ್ಕ ಬುಟ್ಟಿಯಲ್ಲಿ?
ಮಿಷ್ಟು ಕೇಳಿದಳು,
ಕುತೂಹಲ ಇದ್ದರೂ ಬಹಳ ಚಿಂತೆಯಿಂದ.



ಬುಟ್ಟಿ! ಹಿತವಿಲ್ಲದ ಬುಟ್ಟಿ?
ಆಶ್ಚರ್ಯದಿಂದ ಕೇಳಿತು
ಮರಿ ಪಿಕಳಾರ.
ಬುಟ್ಟಿ ಏನೆಂದು
ನನಗೇನು ಗೊತ್ತು,
ಗೊತ್ತಿರುವುದು ಕೇವಲ ಇಷ್ಟೇ,
ಇದು ಮನೆ, ನನ್ನ ಮನೆ.
ಇಲ್ಲೇ ಇದ್ದು, ಬೆಳೆದು,
ರೆಕ್ಕೆ ಬಲಿತ ಕೂಡಲೆ,
ಹಾರಿ ಹೋಗುತ್ತೇನೆ,
ವಿಶಾಲವಾದ
ಆಕಾಶದಲ್ಲಿ ಹಾರಾಡಲು.



ಅಲ್ಲಿ ಸಿಕ್ಕಿಕೊಂಡು ಬಿಟ್ಟಿದ್ದಿಯಾ, ಪುಟ್ಟ ಪಕ್ಷಿ?
ಆ ಕಸದ ನಡುವೆ?
ಕೇಳಿದಳು ಮಿಷ್ಟು,
ಕುತೂಹಲ ಇದ್ದರೂ ಬಹಳ ಗಾಬರಿಯಾಗಿ.

ಸಿಕ್ಕಿಕೊಂಡಿದ್ದೀನಾ, ಕಸದಲ್ಲಿ?
ತಬ್ಬಿಬ್ಬಾಗಿ ಕೇಳಿತು ಮರಿ ಸೂರಕ್ಕಿ.
ಕಸ ಏನೆಂದು ನನಗೇನು ಗೊತ್ತು,
ಗೊತ್ತಿರುವುದು ಕೇವಲ ಇಷ್ಟೇ,
ಇದು ಮನೆ,
ನನ್ನ ಮನೆ.
ಇಲ್ಲೇ ಇದ್ದು, ಬೆಳೆದು,
ರೆಕ್ಕೆ ಬಲಿತ ಕೂಡಲೆ,
ಹಾರಿ ಹೋಗುತ್ತೇನೆ,
ವಿಶಾಲವಾದ ಆಕಾಶದಲ್ಲಿ ಹಾರಾಡಲು.





ಅಷ್ಟು ಮೇಲೆ,
ದೊಡ್ಡ ಮರದಲ್ಲಿ ಅಷ್ಟು ಮೇಲೆ,
ಹೇಗೆ ಇದ್ದೀಯಾ,
ಹೆದರಿಕೆ ಆಗುವುದಿಲ್ಲವೆ?
ಕೇಳಿದಳು ಮಿಷ್ಟು,
ಕುತೂಹಲ ಇದ್ದರೂ ಬಹಳ ಆತಂಕದಿಂದ,
ಆ ಮರಿ ಪಕ್ಷಿಯ ಧೈರ್ಯವನ್ನು ಮೆಚ್ಚುತ್ತಾ.



ಹೆದರಿಕೆ! ಎತ್ತರದ ಹೆದರಿಕೆ! ನನಗೆ?
ಮರಿ ಹದ್ದು ನಗುತ್ತಾ ಕೇಳಿತು.
ನನಗೆ ಗೊತ್ತಿರುವುದು ಕೇವಲ ಇಷ್ಟೇ,
ಇದು ಮನೆ, ನನ್ನ ಮನೆ.
ಇಲ್ಲಿ ಏನು ಹೆದರಿಕೆ?
ಇಲ್ಲೇ ಇದ್ದು, ಬೆಳೆದು,
ರೆಕ್ಕೆ ಬಲಿತ ಕೂಡಲೆ,
ಹಾರಿ ಹೋಗುತ್ತೇನೆ,
ವಿಶಾಲವಾದ ಆಕಾಶದಲ್ಲಿ,
ಅತಿ ಎತ್ತರದಲ್ಲಿ ಹಾರಾಡಲು.

ಪುಟ್ಟ ಮಿಷ್ಟು ಕಲಿತಿದ್ದು ಬಹಳ.
ಚಿಂತೆ, ಆತಂಕ, ಗಾಬರಿ ಎಲ್ಲಾ ದೂರವಾಯಿತು.
ಆದರೂ ...
ಮರಿ ನವಿಲನ್ನು ನೋಡುತ್ತಲೇ,
ಆ ಕ್ಷಣದಲ್ಲೇ ಅಪಾರ ಕುತೂಹಲ ಉಂಟಾಗಿ,
ಆ ನವಿಲು ಮರಿಯನ್ನು ಕೇಳಿದಳು,
ಮನೆ ಬಿಟ್ಟು ಹೇಗೆ ಬಂದೆ ಇಲ್ಲಿಗೆ,
ನಿನ್ನ ರೆಕ್ಕೆ ಇನೂ ಬಲಿತೇ ಇಲ್ಲವಲ್ಲಾ?





## ಇತರ ಶೀರ್ಷಿಕೆಗಳು

ಮಿಷ್ಟು

ಮಿಷ್ಟು ಮಾಡಿದ ಆಯ್ಕೆ

ಮಿಷ್ಟು ಕಂಡ ಚಮತ್ಕಾರ

Vidya Online

A PARTNERSHIP FOR TEACHERS, CHILDREN AND EDUCATION

Visit http://vidyaonline.net for more titles